# ಸಮಾಜಕ್ಕೆ ಮರಳಿ ನೀಡುವ ಕ್ರಮ

ಸಮೀರಾ ವಾಸಾ

ನಮ್ಮ ಗುಂಪಿನಲ್ಲಿ ಪೌರತ್ವ ಶಿಕ್ಷಣದ ಬಗ್ಗೆ ಲೇಖನವೊಂದನ್ನು ಬರೆಯುವುದಕ್ಕೆ ಸಂಬಂಧಿಸಿದ ಸುದ್ದಿ ಪ್ರಸ್ತಾಪವಾದಾಗ ನನಗೆ ಅಚ್ಚರಿ ಎನಿಸಿತು ಮತ್ತು ತಕ್ಷಣ ಮಾರ್ಗದರ್ಶಕರೊಬ್ಬರು ದಿ ಬ್ಯಾಸ್ಟಿನ್ (The Bastion)ನಲ್ಲಿ ಪ್ರಕಟವಾದ ಲೇಖನವೊಂದರ ಮೂಲಕ ನನ್ನಲ್ಲಿ ಅರಿವನ್ನು ಹೆಚ್ಚಿಸಿದರು. ಈ ಲೇಖನವು ಶಾಲೆಗಳಲ್ಲಿನ ಪೌರ ಶಿಕ್ಷಣ ಹಾಗು ನಮ್ಮ ದೇಶದಲ್ಲಿರುವ ವಾಸ್ತವಕ್ಕೆ ಪ್ರತಿಯಾಗಿ ಪಠ್ಯ-ಕ್ರಮದಲ್ಲಿರುವ ವ್ಯತ್ಯಾಸಗಳ ಮೇಲೆ ಬೆಳಕು ಚೆಲ್ಲಿದೆ. ಈ ಲೇಖನವು ನಿಶ್ಚಿತವಾಗಿ ಪೌರತ್ವ ಶಿಕ್ಷಣದ ಬಗ್ಗೆ ಒಂದಷ್ಟು ಹೊಳಹುಗಳನ್ನು ನೀಡಿದೆ. ಆದರೆ ಒಟ್ಟಾರೆಯಾಗಿ ಇದು ನಮ್ಮ ಬದುಕಿನಲ್ಲಿ ಹೇಗೆ ಹಾಸುಹೊಕ್ಕಾಗಿದೆ ಎಂಬುದಕ್ಕೆ ಸಂಬಂಧಿಸಿದಂತೆ ನನ್ನ ತಿಳುವಳಿಕೆಯಲ್ಲಿ ಸಾಕಷ್ಟು ಅಂತರವಿರುವುದು ಕಂಡುಬಂದಿತು.

ಇದು ಪೌರ ಶಿಕ್ಷಣದ ಬಗೆಗಿನ ನನ್ನ ಜ್ಞಾನವನ್ನು ಇನ್ನಷ್ಟು ವಿಸ್ತರಿಸಲು ದಾರಿ ಮಾಡಿಕೊಟ್ಟಿತಾದರೂ ಅದಾದ ಮರುದಿನವೇ ನನಗೆ 7ನೇ ತರಗತಿಯ ಮಕ್ಕಳ ಜೊತೆ ಕುಳಿತು ಪಾಠ ಕೇಳುವ ಅವಕಾಶ ಲಭ್ಯವಾಯಿತು. ಆ ತರಗತಿಯಲ್ಲಿ ಬ್ರಿಟಿಷ್ ಆಡಳಿತಕ್ಕೆ ಸೆಡ್ಡು ಹೊಡೆದ ಭಾರತದ ಕ್ರಾಂತಿಕಾರಿ ವೀರ, ಕರ್ನಾಟಕದವರೇ ಆದ ಮೈಲಾರ ಮಹಾದೇವನ ಬಗ್ಗೆ ಶಿಕ್ಷಕಿ ಪಾಠ ಹೇಳುತ್ತಿದ್ದರು. ಅಂದು ಪುರಾಣಕ್ಕೆ ಸಂಬಂಧಿಸಿದ ಪಾಠ ಮಾಡಿದ ಶಿಕ್ಷಕಿಯನ್ನು ನಾನು ಈಗಾಗಲೇ ಅನೇಕ ಬಾರಿ ಭೇಟಿ ಮಾಡುವ ಅವಕಾಶ ಲಭ್ಯವಾಗಿತ್ತು. ಅವರ ಬಳಿ ಕಥೆಗಳು ಹಾಗು ಸಾದೃಶ್ಯಗಳ ದೊಡ್ಡ ಭಂಡಾರವೇ ಇತ್ತು. ಆ ಕಥೆಯ ನಾಯಕನಾದವನು ಬ್ರಿಟಿಷರು ತಯಾರಿಸಿದ ಟೊಪ್ಪಿಯನ್ನು ಹೇಗೆ ವಿದೇಶಿ ಎಂದು ಭಾವಿಸಿದ ಮತ್ತು ಅದನ್ನು ತಕ್ಷಣ ಕಿತ್ತೆಸೆದ ಎಂಬುದನ್ನು ಶಿಕ್ಷಕಿ ವಿವರಿಸಲು ಆರಂಭಿಸಿದ್ದರು. ಆ ಬಳಿಕ ಆಕೆ ವಿದೇಶಿ ಮತ್ತು ಸ್ವದೇಶಿಯ ಬಗ್ಗೆ ವಿವರಣೆ ನೀಡುತ್ತ ಹೋದರು. ಈ ಹಂತದಲ್ಲಿ ಆಕೆ ಮಕ್ಕಳ ಬಳಿ ಆ ವಿಷಯವನ್ನು ಮಂಡಿಸಿದ ರೀತಿ ಸುಂದರವಾಗಿತ್ತು; ಒಂದು ಗಿಡವನ್ನು ನೆಟ್ಟು, ಅದಕ್ಕೆ ನೀರೆರೆದು ಪೋಷಿಸಿ, ಕಾಳಜಿ ಮಾಡಿ ಅಂತಿಮವಾಗಿ ಅದು ಸುಂದರವಾದ ಹೂವು ಬಿಡುವುದನ್ನು ಕಲ್ಪಿಸಿಕೊಳ್ಳಿ ಎಂದು ಆಕೆ ಹೇಳಿದರು.

ಇಂತಹ ಒಂದು ಉದಾಹರಣೆಯ ಮೂಲಕ ಸ್ವದೇಶಿ ಎಂಬುದರಲ್ಲಿ ತಮ್ಮದು, ತಮಗೆ ಸೇರಿದ್ದು ಎಂಬ ಭಾವನೆ ಹೇಗೆ ತಳುಕು ಹಾಕಿಕೊಂಡಿರುತ್ತದೆ ಎಂಬುದನ್ನು ಆಕೆ ವಿವರಿಸಲು ಬಯಸಿದ್ದರು. ತಾವೇ ಪೋಷಿಸಿ ಬೆಳೆಸಿದ ಗಿಡದಿಂದ ಹೂವನ್ನು ಪಡೆಯುವುದಕ್ಕೂ, ಮಾರುಕಟ್ಟೆಯಿಂದ ತರುವ ಹೂವಿನ ಬಗ್ಗೆ ಇರುವ ಭಾವನೆಗೂ ಎಷ್ಟು ವ್ಯತ್ಯಾಸವಿದೆ ಎಂಬುದನ್ನು ವಿವರಿಸುವಂತೆ ಶಿಕ್ಷಕಿ ಮಕ್ಕಳನ್ನು ಕೇಳಿದ್ದರು.

ಅದಾದ ಬಳಿಕ ಶಿಕ್ಷಕಿ ಜವಾಬ್ದಾರಿಯ ಬಗ್ಗೆ ವ್ಯಾಖ್ಯಾನವನ್ನು ನೀಡಲು ಪ್ರತಿಯೊಬ್ಬರಿಗೂ ಅನ್ವಯವಾಗುವಂತಹ ಇನ್ನೊಂದು ಕಥೆಯನ್ನು ಹೇಳಿದರು. ಭಾರತದ ಸರ್ಕಾರಿ ಶಾಲೆಯಲ್ಲಿ ಕಲಿತ ವ್ಯಕ್ತಿಯೊಬ್ಬ ಅಂತಿಮವಾಗಿ ಉತ್ತಮವಾದ ಜೀವನವನ್ನು ಸಾಗಿಸಲು ವಿದೇಶಕ್ಕೆ ವಲಸೆ ಹೋದ ಕಥೆ ಅದಾಗಿತ್ತು. ಆ ನಂತರ ಅವರು, ಈ ದೇಶದ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ಬಳಸಿಕೊಂಡು, ಆದರೆ ದೇಶಕ್ಕೆ ಮರಳಿ ಏನನ್ನೂ ಕೊಡದವರು ಯಾರಾದರೂ ನಿಮಗೆ ತಿಳಿದಿದ್ದಾರೆಯೇ ಎಂದು ಮಕ್ಕಳನ್ನು ಕೇಳಿದರು. ಶಿಕ್ಷಕಿ ಮಕ್ಕಳಿಗೆ ಯೋಚನೆ ಮಾಡಲು ಆಹಾರವನ್ನು ಕೊಟ್ಟಿದ್ದರು ಮತ್ತು ನನ್ನ ಮೇಲೆ ಸಮಾಜದ ಋಣ ಎಷ್ಟಿದೆ ಎಂದು ನಾನೂ ಕೂಡ ಯೋಚನೆ ಮಾಡುವಂತಾಯಿತು. ಒಂದು ಮಗುವಾಗಿ, ಕುಟುಂಬದ ಸದಸ್ಯರಾಗಿ ಮತ್ತು ವಿದ್ಯಾರ್ಥಿಯಾಗಿ ಪಾಲಕರ ಬಗ್ಗೆ ತಮ್ಮ ಜವಾಬ್ದಾರಿ ಏನು ಎಂಬುದನ್ನು ಯೋಚನೆ ಮಾಡುವಂತೆ ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಕೇಳುವ ಮೂಲಕ ಅವರು ತಮ್ಮ ತರಗತಿಯನ್ನು ಅಂದು ಮುಕ್ತಾಯಗೊಳಿಸಿದ್ದರು.

ಆದರೆ ತರಗತಿಯೇನೂ ಅಲ್ಲಿಗೇ ಮುಗಿದಿರಲಿಲ್ಲ. ಶಿಕ್ಷಕರು ಶೌಚಾಲಯಕ್ಕೆ ಹೋಗಲು, ಅವರ ತಟ್ಟೆಗಳನ್ನು ಸ್ವಚ್ಛಗೊಳಿಸಲು, ಅವರ ಬುತ್ತಿಯನ್ನು ತೆರೆಯಲು ಮಕ್ಕಳು ತಾವಾಗಿಯೇ ಮುಂದೆ ಬಂದು ಸಹಾಯ ಮಾಡಿದರು. ಶಿಕ್ಷಕರು ಮುಂದಿನ ತರಗತಿಗೆ ಹೋಗುವ ತನಕ ಅವರಿಗೆ ಬೇಕಾದ ಸಹಾಯವನ್ನು ಮಕ್ಕಳು ಮಾಡಿದ್ದು ವಿಶೇಷವಾಗಿತ್ತು. ಇದಕ್ಕೆ ಕಾರಣವನ್ನು ನಾನು ಹೇಳಲೇಬೇಕಾಗಿದೆ– ಆ ಶಿಕ್ಷಕಿಗೆ ಅಂಗವಿಕಲತೆ ಇದ್ದು ಅವರಿಗೆ ಓಡಾಡಲು ಸಹಾಯದ ಅಗತ್ಯವಿತ್ತು. ಇನ್ನೊಂದು ಅಚ್ಚರಿಯ ಸಂಗತಿ ಏನೆಂದರೆ ಅವರ ತರಗತಿಯಲ್ಲಿ ಸಹಾಯ ಮಾಡುವಂತೆ ಯಾರೂ ಮಕ್ಕಳಿಗೆ ವಿಶೇಷವಾಗಿ ಹೇಳಬೇಕಾದ ಅಗತ್ಯವಿರಲಿಲ್ಲ. ಎಲ್ಲರೂ ಅವರಾಗಿಯೇ ಎದ್ದು ಬಂದು ಅತ್ಯಂತ ವ್ಯವಸ್ಥಿತವಾದ ರೀತಿಯಲ್ಲಿ ಶಿಕ್ಷಕಿಗೆ ಸಹಾಯ ಮಾಡುತ್ತಿದ್ದರು.

ಈ ಶಿಕ್ಷಕಿಯು ಅನೇಕ ಗೌರವಗಳಿಗೆ ಪಾತ್ರರಾಗಿದ್ದರು. ಇಲ್ಲಿ ಪ್ರಸ್ತಾಪ ಮಾಡಲೇಬೇಕಾದ ಅವರ ಇನ್ನೊಂದು ವಿಶೇಷ ಗುಣ ಏನೆಂದರೆ ಆಕೆ ಪಾಠ ಮಾಡುವುದನ್ನೆಲ್ಲ ಪ್ರಯೋಗದ ರೂಪದಲ್ಲಿ ಜಾರಿಗೆ ತರುತ್ತಿದ್ದರು. ಅವರು ಮಾಡುವ ಇಂತಹ ಕೆಲಸಗಳು ಇತರರಿಗೆ ಸ್ಫೂರ್ತಿಯಾಗುತ್ತಿತ್ತು ಮತ್ತು ಇನ್ನಷ್ಟು ಉತ್ತಮ ಜೀವನವನ್ನು ನಡೆಸಲು ಪ್ರೇರಣೆ ನೀಡುತ್ತಿತ್ತು. ಶಿಕ್ಷಕಿಯಾಗಿ ನಿವೃತ್ತಿಯಾಗಲು ಇನ್ನೇನು ಏಳು ತಿಂಗಳು ಮಾತ್ರ ಬಾಕಿಯಿದ್ದ ಅವರು, ನಿವೃತ್ತಿಯ ಬಳಿಕ ತಮ್ಮ ಸಮಯವನ್ನು ತನ್ನ ಊರಿಗೆ ತೆರಳಿ ತಾನು ಚಿಕ್ಕವಳಿದ್ದಾಗ ಕಲಿತ ಶಾಲೆಯಲ್ಲಿ ಸ್ವಯಂಸೇವಕಿಯಾಗಿ ಕೆಲಸ ಮಾಡುವ ಯೋಜನೆಯನ್ನು ಹೊಂದಿದ್ದರು. ಈಗಾಗಲೇ ನೂರು ವರ್ಷಗಳನ್ನು ಪೂರೈಸಿರುವ ಅವರ ತವರಿನ ಆ ಶಾಲೆಯಿಂದಾಗಿಯೇ ಇಂದು ತಾನು ಹೀಗಿರುವುದಕ್ಕೆ ಕಾರಣ, ಮತ್ತೆ ಅಲ್ಲಿ ಹೋಗಿ ಸೇವೆ ಸಲ್ಲಿಸುವುದು ತನ್ನ ಜವಾಬ್ದಾರಿ. ತನಗೆ ಕಲಿಸಿದ ಶಿಕ್ಷಕರಿಗೆ, ತವರೂರಿಗೆ ಮತ್ತು ತನ್ನ ಸಮುದಾಯಕ್ಕೆ ಋಣ ಸಂದಾಯ ಮಾಡುವುದು ಕರ್ತವ್ಯ ಎಂದು ಅವರು ವಿವರಿಸಿದ್ದು ವಿಶೇಷವಾಗಿತ್ತು.

ನಾವು ಕೇವಲ ಮನುಷ್ಯರಾಗಿರುವುದು ಮಾತ್ರವಲ್ಲದೆ ಅದಕ್ಕಿಂತ ಹೆಚ್ಚಿನದನ್ನು ಸಮಾಜಕ್ಕಾಗಿ ಮಾಡಬೇಕು ಎನ್ನುವುದಕ್ಕೆ ಈ

ಶಿಕ್ಷಕಿಯೇ ನನಗೆ ಸದಾ ಪ್ರೇರಣೆ ಮತ್ತು ಸ್ಫೂರ್ತಿಯಾಗಿದ್ದಾರೆ. ಆಕೆ ತಮ್ಮ ಭಾಷೆ, ಗಣಿತ ವಿಷಯ ಮತ್ತು ಸಾಮಾನ್ಯ ಚರ್ಚೆಯ ಮೂಲಕ ವಿದ್ಯಾರ್ಥಿಗಳಲ್ಲಿ ಉತ್ತಮ ಮೌಲ್ಯಗಳನ್ನು ತುಂಬುವ ಸಾಮರ್ಥ್ಯವನ್ನು ಹೊಂದಿದವರು ಎನ್ನುವುದರಲ್ಲಿ ಯಾವುದೇ ಅನುಮಾನವಿರಲಿಲ್ಲ. ಮಕ್ಕಳಲ್ಲಿ ಇಂತಹ ಮೌಲ್ಯಗಳನ್ನು ತುಂಬುವುದರಿಂದ ಅವರ ನಡವಳಿಕೆಯಲ್ಲಿ ಬದಲಾವಣೆಗಳು ಕಾಣಿಸಿಕೊಳ್ಳುತ್ತವೆ ಮತ್ತು ಅದು ಮಕ್ಕಳ ಕಲಿಕೆಯಲ್ಲಿ ಧನಾತ್ಮಕ ನಿಟ್ಟಿನಲ್ಲಿ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ನಾನು ಕಂಡುಕೊಂಡಿದ್ದೇನೆ. ಇದಕ್ಕೆ ಆ ಶಿಕ್ಷಕಿಯ ತರಗತಿಯಲ್ಲಿದ್ದ ವಿದ್ಯಾರ್ಥಿಗಳೇ ಸಾಕ್ಷಿಯಾಗಿದ್ದರು. ಆ ಮಕ್ಕಳು ಖುಷಿಖುಷಿಯಿಂದ ಕಲಿಯುತ್ತಿದ್ದರು, ಸದಾ ಸಹಾನುಭೂತಿಯನ್ನು ಹೊಂದಿದ್ದರು, ದೃಢನಿಶ್ಚಯವನ್ನು ಹೊಂದಿದ್ದರು, ಸಮಸ್ಯೆಗಳನ್ನು ಪರಿಹರಿಸುವ ಮನೋಭಾವದವರಾಗಿದ್ದರು ಮತ್ತು ಒಟ್ಟಿಗೆ ಸೇರಿ ಕೆಲಸ ಮಾಡುವ ಮನೋಭಾವವನ್ನು ಹೊಂದಿದ್ದರು. ಆಕೆ ಪಾಠ ಮಾಡಿದ್ದನ್ನು ಪ್ರಯೋಗದ ಮೂಲಕ ಜಾರಿಗೆ ತರುತ್ತಿದ್ದರು ಎಂಬುದಕ್ಕೆ ಆ ಮಕ್ಕಳೇ ಮಾದರಿಗಳಾಗಿದ್ದರು. ಜವಾಬ್ದಾರಿ, ಪ್ರಾಮಾಣಿಕತೆ, ಸಮಾಜಕ್ಕೆ ಮರಳಿ ನೀಡುವುದು ಮುಂತಾದ ಬೋಧನೆಗಷ್ಟೇ ಸೀಮಿತವಾದ ಪದಗಳು ಭಾವನೆಗಳನ್ನು ಪ್ರಚೋದಿಸಲು ಕಲಿಸಿದಾಗ, ಮಕ್ಕಳಿಗೆ ಇವುಗಳನ್ನು ಸಮರ್ಪಕವಾಗಿ ಮಾಡಿದಾಗ ಮತ್ತು ಎಲ್ಲಕ್ಕಿಂತ ಮುಖ್ಯವಾಗಿ ಮಾತಿನಲ್ಲಿ ಹೇಳಿದ್ದನ್ನು ಪ್ರತಿ ದಿನವೂ ಅತ್ಯಂತ ತಾಳ್ಮೆಯಿಂದ ಮತ್ತು ಸಂತೋಷದಿಂದ ಕಾರ್ಯರೂಪಕ್ಕೆ ತಂದಾಗ ಹೆಚ್ಚು ಪರಿಣಾಮಕಾರಿಯಾಗುತ್ತವೆ.



**ಸಮೀರಾ ವಾಸಾ** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ಫೌಂಡೇಷನ್‌ನ ಜಿಲ್ಲಾ ಸಂಸ್ಥೆಯಲ್ಲಿ ಸಂಪನ್ಮೂಲ ವ್ಯಕ್ತಿಯಾಗಿದ್ದಾರೆ. ಸೃಜನಾತ್ಮಕ ಕಲೆಗಳನ್ನು ಇಷ್ಟಪಡುವ ಅವರಿಗೆ ಮಕ್ಕಳೊಂದಿಗೆ ಕೆಲಸ ಮಾಡುವುದೆಂದರೆ ಅಚ್ಚುಮೆಚ್ಚು. ಹಾಗಾಗಿ ಅವರು ಮಕ್ಕಳೊಂದಿಗೆ ಕೆಲಸ ಮಾಡಲು ಮತ್ತು ಅವರ ಮನಸ್ಸನ್ನು ಅರ್ಥ ಮಾಡಿಕೊಳ್ಳುವ ನಿಟ್ಟಿನಲ್ಲಿ ಸೃಜನಾತ್ಮಕ ದಾರಿಗಳನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಸಮೀರಾ ಅವರನ್ನು ಈ ಮಿಂಚಂಚೆ ಮೂಲಕ ಸಂಪರ್ಕಿಸಬಹುದಾಗಿದೆ: sameera.vasa@azimpremjifoundation.org

ಅನುವಾದ: **ಮಂಜುನಾಥ್ ಚಾಂದ್** । ಪರಿಶೀಲನೆ: **ಲತಾ ಕೆ.ಸಿ.**

**ಯಾರೋ ಒಬ್ಬರು ಮಾತನಾಡುತ್ತಿದ್ದಾಗ ಶಿಕ್ಷಕರು ಸೇರಿದಂತೆ ಪ್ರತಿಯೊಬ್ಬರು ಕೂಡ ತಮ್ಮ ಮಾತಿಗೆ ಅವಕಾಶ ಸಿಗುವ ತನಕ ಕಾಯಬೇಕು, ಕೈ ಎತ್ತುವುದು ಮತ್ತು ಮಧ್ಯಪ್ರವೇಶ ಮಾಡುವಂತಿಲ್ಲ ಎಂಬುದು ನಮ್ಮ ನಿಯಮಗಳ ಭಾಗವಾಗಿದೆ. ಪ್ರತಿಯೊಂದು ಮಾತನ್ನೂ ಕೇಳಲಾಗುತ್ತದೆ ಮತ್ತು ಯಾವುದಾದರೂ ಭಿನ್ನಾಭಿಪ್ರಾಯಗಳಿದ್ದರೆ ನಾವು ಅದಕ್ಕೆ ಕಾರಣಗಳನ್ನು ಕೇಳಲಿದ್ದೇವೆ. ಇದನ್ನು ಪರಸ್ಪರ ಒಪ್ಪಿತವೇ ಎಂಬುದನ್ನು ಮಕ್ಕಳೇ ನಿರ್ಧಾರ ಮಾಡಲು ಬಿಡಲಾಗುತ್ತದೆ. ಇಂತಹ ಒಂದು ವ್ಯವಸ್ಥೆಯು ಪ್ರತಿಯೊಂದು ವಿಷಯವೂ ತನಗೆ ತಿಳಿದಿದೆ ಮತ್ತು ಯಾವತ್ತೂ ತಾನೇ ಮಾತನಾಡಬೇಕು ಮತ್ತು ಮೊದಲು ಉತ್ತರ ಕೊಡಬೇಕು ಎಂದು ಭಾವಿಸುವ ವಿದ್ಯಾರ್ಥಿಗಳಿಗೆ ಸಹಾಯವಾಗುತ್ತದೆ. ಅವರು ತಮಗೆ ಅವಕಾಶ ಸಿಗುವವರೆಗೂ ಕಾಯುವುದನ್ನು ಕಲಿತರು, ಇತರರ ಅಭಿಪ್ರಾಯಗಳನ್ನು ಗೌರವಿಸುವುದು ಹಾಗೂ ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳುವುದನ್ನು ಕಲಿತರು.**

**–ಪೂಜಾ ವಿಷ್ಣೋಯ್, ಸಮಾಜದ ಸೂಕ್ಷ್ಮಪದರವಾಗಿ ಶಾಲೆ, (ಸ್ಕೂಲ್ ಆ್ಯಸ್ ಎ ಮೈಕ್ರೋಕಾಸ್ಮ್ ಆಫ್ ಸೊಸೈಟಿ) ಪುಟ–74**